ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತೊಂದನೆಯ ಅಧಿವೇಶನ

ಶುಕ್ರವಾರ, ದಿನಾಂಕ: 25ನೇ ಸೆಪ್ಟಂಬರ್, 2020

ಲಾಕ್‌ಡೌನ್ ಪ್ರಕ್ರಿಯೆಯಿಂದ ರಾಜ್ಯದ ಟ್ಯಾಕ್ಸಿ ಮತ್ತು ಆಟೋ ಚಾಲಕರ ಕುಟುಂಬಗಳಿಗೆ ಆದ ನಷ್ಟದ ಕುರಿತು

ಶ್ರೀ ಪಿ.ಆರ್.ರಮೇಶ್ (ನಾಮನಿರ್ದೇಶನ ಹೊಂದಿದವರು) :-

682 (789) ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಪ್ರಸ್ತುತ ಕರೋನ ಮಹಾಮರಿ ಹಿನ್ನೆಲೆಯಲ್ಲಿ ರಾಜ್ಯದ ಹಲವಾರು ಟ್ಯಾಕ್ಸಿ ಚಾಲಕರು ಮತ್ತು ಆಟೋ ಚಾಲಕರು ಲಾಕ್ ಡೌನ್ ಪ್ರಕ್ರಿಯೆಯಿಂದ ನಷ್ಟಕ್ಕೊಳಗಾಗಿ ತಮ್ಮ ಕುಟುಂಬದ ದೈನಂದಿನ ಜೀವನ ನಿರ್ವಹಿಸಲು ಸಾಧ್ಯವಾಗದೆ ನಗರಗಳನ್ನು ತೊರೆದು ತಮ್ಮ ಹಳ್ಳಿಗಳಿಗೆ ವಾಪಸ್ ಹೋಗಿರುವ ವಿಷಯ ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಆ) ಬಂದಿದ್ದಲ್ಲಿ ಸರ್ಕಾರದಿಂದ ಈ ವರ್ಗಕ್ಕೆ ಯಾವುದಾದರೂ ಪರಿಹಾರ ಧನ ನೀಡಲಾಗಿದೆಯೇ ; ನೀಡಿದ್ದಲ್ಲಿ ವಿವರ ನೀಡುವುದು;

(ಇ) ಎಷ್ಟು ಚಾಲಕರಿಗೆ ಮತ್ತು ಎಷ್ಟು ಮೊತ್ತದ ಪರಿಹಾರ ಧನ ನೀಡಲಾಗಿದೆ; (ವರ್ಗವಾರು ವಿವರ ನೀಡುವುದು)

(ಈ) ಪರಿಹಾರ ಧನವನ್ನು ವಿತರಿಸಲು ಯಾವ ಮಾನದಂಡಗಳನ್ನು ಅನುಸರಿಸಲಾಗಿದೆ ; (ಸಂಪೂರ್ಣ ವಿವರ ನೀಡುವುದು)

(ಉ) ವಲಸೆ ಹೋಗಿರುವ ಈ ವರ್ಗದ ಕುಟುಂಬಗಳನ್ನು ಮರಳಿ ವಾಪಸ್ ಕರೆತರಲು ಸರ್ಕಾರ ಚಿಂತನೆ ನಡೆಸಿದೆಯೇ ? (ವಿವರ ನೀಡುವುದು)